ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಶುಕ್ರವಾರ, ದಿನಾಂಕ : 20 ನೇ ಮಾರ್ಚ್, 2020

ರಾಜ್ಯದಲ್ಲಿರುವ ಅಂಗನವಾಡಿ ಕೇಂದ್ರಗಳ ಕುರಿತು

ಶ್ರೀ ಐವನ್ ಡಿ'ಸೋಜಾ(ನಾಮನಿರ್ದೇಶನ ಹೊಂದಿದವರು) ಮತ್ತು ಡಾ|| ಜಯಮಾಲ ರಾಮಚಂದ್ರ(ನಾಮನಿರ್ದೇಶನ ಹೊಂದಿದವರು):-

1352 (1605+1652) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರಿಕರ ಸಬಲೀಕರಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿರುವ ಅಂಗನವಾಡಿ ಕೇಂದ್ರಗಳೆಷ್ಟು ; ಸ್ವಂತ ಕಟ್ಟಡದಲ್ಲಿ/ಬಾಡಿಗೆ ಕಟ್ಟಡದಲ್ಲಿರುವುದು ಎಷ್ಟು ; ಈ ಅಂಗನವಾಡಿಗಳ ಹೊರಾಂಗಣದಲ್ಲಿ ಆಟ-ಪಾಠಗಳಿಗೆ ಜಾಗ ಮೀಸಲಿರಿಸಲಾಗಿದೆಯೇ;

(ಆ) ಅಂಗನವಾಡಿಗಳಲ್ಲಿ ಶೌಚಾಲಯವನ್ನು ಒದಗಿಸಲಾಗಿದೆಯೇ ; ಎಷ್ಟು ಅಂಗನವಾಡಿಗಳಲ್ಲಿ ಈ ಸೌಲಭ್ಯವಿರುವುದಿಲ್ಲ; ಸದರಿ ಸೌಲಭ್ಯಗಳನ್ನು ಪೂರ್ಣಗೊಳಿಸುವುದು ಯಾವಾಗ ; (ವಿವರ ನೀಡುವುದು)

(ಇ) ಎಲ್ಲಾ ಅಂಗನವಾಡಿ ಕಛೇರಿಗಳಲ್ಲಿ "ತಗಡು ಸೀಟು" ಮೇಲ್ಛಾವಣಿ ನಿರ್ಮಿಸಿರುವುದರಿಂದ ಬಿಸಿಲಿನ ತಾಪದಿಂದ ಮಕ್ಕಳು ಬಳಲುತ್ತಿರುವುದು ಸರ್ಕಾರದ ಗಮನದಲ್ಲಿದೆಯೇ ; ರಾಜ್ಯದಲ್ಲಿರುವ ಈ ರೀತಿ ಕಟ್ಟಡಗಳು ಎಷ್ಟು ; (ವಿವರ ಒದಗಿಸುವುದು)

(ಈ) ಹೊರಾಂಗಣ ಆಟಕ್ಕಾಗಿ ಸ್ಥಳದ ಕೊರತೆ ಇರುವ ಅಂಗನವಾಡಿ ಕೇಂದ್ರಗಳೆಷ್ಟು ; (ಜಿಲ್ಲಾವಾರು ವಿವರ ನೀಡುವುದು) ಹೊರಾಂಗಣ ಆಟಗಳಿಗೆ ಸಂಬಂಧಿಸಿದಂತೆ ಎಷ್ಟು ಅಂಗನವಾಡಿಗಳಲ್ಲಿ ಆಟಿಕೆಗಳನ್ನು ನೀಡಲಾಗಿದೆ ;

(ಉ) ಸರ್ಕಾರ ಹೊರಾಂಗಣದ ಆಟಿಕೆಗಳಿಗಾಗಿ ನೀಡಿದ ಹಣವೆಷ್ಟು ; ಹಾಗೂ ಅದರಲ್ಲಿ ಖರ್ಚಾದ ಹಣವೆಷ್ಟು ; (ಜಿಲ್ಲಾವಾರು ಮಾಹಿತಿ ನೀಡುವುದು)

(ಊ) ರಾಜ್ಯದಲ್ಲಿ ಪ್ರತಿ ಬುಧವಾರ ಮತ್ತು ಶುಕ್ರವಾರ ಅಂಗನವಾಡಿ ಮಕ್ಕಳಿಗೆ `ಮೊಟ್ಟೆ' ನೀಡುವ ಕಾರ್ಯಕ್ರಮಗಳು ಇದೆಯೇ ? (ವಿವರ ನೀಡುವುದು)